## ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 725
02. ಸದಸ್ಯರ ಹೆಸರು : ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ)
03. ಉತ್ತರಿಸುವ ದಿನಾಂಕ : 12.03.2020
04. ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2019ರ ವಿಧಾನಸಭಾ ಉಪಚುನಾವಣೆಯ ಅಕ್ರಮಗಳಲ್ಲಿ ಪೋಲೀಸ್ ಇಲಾಖೆಯ ನೌಕರರು ಭಾಗಿಯಾಗಿರುವುದು ನಿಜವೇ? ಇದ್ದಲ್ಲಿ ಅವರ ಹೆಸರು, ಹುದ್ದೆವಾರು ವಿವರ ನೀಡುವುದು? | ಹೌದು.<br><br>2019ರ ವಿಧಾನಸಭಾ ಉಪ ಚುನಾವಣೆಯ ಸಂಧರ್ಭದಲ್ಲಿ ಬೆಂಗಳೂರು ನಗರದ ಶಿವಾಜಿನಗರ ಉಪ ಚುನಾವಣೆಯ ಸಮಯದಲ್ಲಿ ಹಲಸೂರು ಪೊಲೀಸ್ ಠಾಣೆಯ ಸಿಬ್ಬಂದಿ ಶ್ರೀನಿವಾಸ್ ಮೂರ್ತಿ, ಎ.ಎಸ್.ಐ ಮತ್ತು ಲಕ್ಷ್ಮಣ ಚಿಂಚೋಳಿ, ಪಿಸಿ–14126 ರವರುಗಳು ಚುನಾವಣಾ ಕರ್ತವ್ಯ ನಿರ್ವಹಿಸುವ ಸಮಯದಲ್ಲಿ ಲಂಚ ಸ್ವೀಕರಿಸಿ ಚುನಾವಣಾ ಅಕ್ರಮ ಚಟುವಟಿಕೆಗಳಿಗೆ ಸಹಕರಿಸಿರುವ ಆರೋಪದ ಮೇಲೆ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರಿಸಿಕೊಂಡು ಅಮಾನತ್ತುಗೊಳಿಸಲಾಗಿದೆ. |
| ಆ) | ಯಶವಂತಪುರ ವಿಧಾನಸಭಾ ಕ್ಷೇತ್ರದ ಉಪಚುನಾವಣೆಯ ಅಕ್ರಮಗಳಲ್ಲಿ ಪೋಲೀಸ್ ಇಲಾಖೆಯ ಪೇದೆ ಮತ್ತು ಮುಖ್ಯ ಪೇದೆಗಳು ಭಾಗಿಯಾಗಿರುವುದು ನಿಜವೇ? ಇದ್ದಲ್ಲಿ ಅವರ ಹೆಸರು, ಹುದ್ದೆ ಹಾಗೂ ಆ ಸಮಯದಲ್ಲಿ ಅವರು ಕೆಲಸ ಮಾಡುತ್ತಿದ್ದ ಇಲಾಖಾವಾರು ವಿವರ ಮತ್ತು ಎಷ್ಟು ವರ್ಷಗಳಿಂದ ಆ ಇಲಾಖೆಯ ಯಾವ ಹುದ್ದೆಯಲ್ಲಿ ಕೆಲಸ ಮಾಡುತ್ತಿದ್ದಾರೆ ಎಂಬ ವಿವರ ನೀಡುವುದು? | ಅಂತಹ ಪ್ರಕರಣಗಳು ಇರುವುದಿಲ್ಲ. |
| ಇ) | ಸದರಿಯವರು ಅಕ್ರಮಗಳಲ್ಲಿ ಭಾಗಿಯಾಗಿರುವ ಬಗ್ಗೆ ದೂರು ನೀಡಿರುವವರು ಯಾರು ಮತ್ತು ದೂರಿನ ಪ್ರತಿ ನೀಡುವುದು? | ಉದ್ಭವಿಸುವುದಿಲ್ಲ. |
| ಈ) | ಸದರಿಯವರ ವಿರುದ್ಧ ಚುನಾವಣಾ ಆಯೋಗ ಮತ್ತು ಪೋಲೀಸ್ ಆಯುಕ್ತರ ಕಛೇರಿಯಲ್ಲಿ ದೂರು ದಾಖಲಾಗಿರುವುದು ನಿಜವೇ? ಇದ್ದಲ್ಲಿ ಚುನಾವಣಾ ಆಯೋಗ ಇವರುಗಳ ವಿರುದ್ಧ ಮಾಡಿರುವ ಶಿಫಾರಸ್ಸು ಮತ್ತು ಪೋಲೀಸ್ ಇಲಾಖೆ ಕೈಗೊಂಡಿರುವ ಕ್ರಮಗಳ ವಿವರ ನೀಡುವುದು? | ಉದ್ಭವಿಸುವುದಿಲ್ಲ. |
| ಉ) | ಸದರಿ ಪೋಲೀಸರು ಪೋಲೀಸ್ ಇಲಾಖೆಯಲ್ಲಿ ನೇಮಕಾತಿಯಾದ ಹುದ್ದೆಗೆ ತಕ್ಕಂತೆ ಕೆಲಸ ನಿರ್ವಹಿಸಲು ನ್ಯಾಯ ಒದಗಿಸದೇ ಬೇರೆ ಇಲಾಖೆಗಳಿಗೆ ಎರವಲು ಸೇವೆ ಮೇಲೆ ಕರ್ತವ್ಯ ನಿರ್ವಹಿಸದಂತೆ ತಡೆಗಟ್ಟಲು ಪೋಲೀಸ್ ಇಲಾಖೆ ಕೈಗೊಳ್ಳುವ ಕ್ರಮಗಳೇನು? (ವಿವರ ಒದಗಿಸುವುದು) | ಅನ್ವಯಿಸುವುದಿಲ್ಲ |

HD/12/PPS/2020-PS_B

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು